# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 21 |
| ಸದಸ್ಯರ ಹೆಸರು | : | ಶ್ರೀ ಮಾನೆ ಶ್ರೀನಿವಾಸ್ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | | 22-09-2020 |
| ಉತ್ತರಿಸಬೇಕಾದ ಸಚಿವರು | | ಮಾನ್ಯ ನಗರಾಭಿವೃದ್ಧಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯ ಗುತ್ತಿಗೆ ಪೌರ ಕಾರ್ಮಿಕರನ್ನು ನೇರ ನೇಮಕಾತಿ ಹಾಗೂ ನೇರ ವೇತನ ಪಾವತಿ ಅಡಿಯಲ್ಲಿ ನೇಮಕಾತಿಗೊಳಿಸುವ ಪ್ರಸ್ತಾವನೆ ಸರಕಾರದ ಮುಂದೆಯೇ; | ಹೌದು. ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯಲ್ಲಿ ಕ್ಷೇಮಾಭಿವೃದ್ಧಿ/ದಿನಗೂಲಿ/ಗುತ್ತಿಗೆ/ಹೊರಗುತ್ತಿಗೆ/ಸಮಾನ ಕೆಲಸಕ್ಕೆ ಸಮಾನ ವೇತನದಲ್ಲಿ ಕಾರ್ಯನಿರ್ವಹಿಸುತ್ತಿರುವ ಪೌರ ಕಾರ್ಮಿಕರನ್ನು ನೇರ ನೇಮಕಾತಿ ಮಾಡಿಕೊಳ್ಳಲು ನೇಮಕಾತಿ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿ ಧಾರವಾಡ ಇವರಿಂದ ತಿದ್ದುಪಡಿ ಅಧಿಸೂಚನೆ ಸಂಖ್ಯೆ:ಡಿಯುಡಿಸಿ/ಮ.ನ.ಪಾ/ಪಿ.ಕೆ.ನೇಮಕಾತಿ/ವಹಿ/2018 ದಿನಾಂಕ:17.07.2018 ರನ್ವಯ 134 ಪೌರ ಕಾರ್ಮಿಕರನ್ನು ನೇರನೇಮಕಾತಿ ಮಾಡಿಕೊಳ್ಳಲು ಅಧಿಸೂಚನೆ ಹೊರಡಿಸಲಾಗಿದೆ.<br><br>ನೇರ ಪಾವತಿ ಕುರಿತು, ಜಿಲ್ಲಾಧಿಕಾರಿಗಳು ಧಾರವಾಡ ರವರು ಪತ್ರ ಸಂಖ್ಯೆ: ಜಿಕಾಧಾ:ಜಿನಕೋ:ಸಿ (ಮನಪಾ) : ಪೌಕಾ:ವಹಿ:2018-19/818 ದಿ:31.12.2018 ರಲ್ಲಿ ಅರ್ಹ ಪೌರಕಾರ್ಮಿಕರ ಪಟ್ಟಿಯನ್ನು ಆಯುಕ್ತರು, ಮಹಾನಗರಪಾಲಿಕೆ ಹುಬ್ಬಳ್ಳಿ-ಧಾರವಾಡ ಇವರ ಹಂತದಲ್ಲಿಯೇ ನಿಯಮಾನುಸಾರ ಅಂತಿಮಗೊಳಿಸಿ ನೇರ ವೇತನ ಪಾವತಿಸಲು ಸೂಚಿಸಲಾಗಿರುತ್ತದೆ. |
| ಆ) | ಹಾಗಿದ್ದಲ್ಲಿ ನೇಮಕಾತಿಗೊಳಿಸಲು ಅವಶ್ಯವಿರುವ ಮಾನದಂಡಗಳೇನು; | ಜಿಲ್ಲಾಧಿಕಾರಿಗಳು, ಧಾರವಾಡ ಇವರ ಅಧಿಸೂಚನೆ ದಿ:16.03.2018 ರಲ್ಲಿ ಶೈಕ್ಷಣಿಕ ವಿದ್ಯಾರ್ಹತೆ ಹಾಗೂ ಇನ್ನಿತರೇ ಮಾನದಂಡಗಳ ಕುರಿತು ಅನುಬಂಧ-1 ರಲ್ಲಿ ಒದಗಿಸಲಾಗಿದೆ. |
| ಇ) | ಸದರಿ ಪೌರ ಕಾರ್ಮಿಕರಿಗೆ ನೇರ ನೇಮಕಾತಿ ಹಾಗೂ ನೇರ ವೇತನ ಪಾವತಿ ಜಾರಿಗೊಳಿಸಲು ಸರಕಾರ ವಿಳಂಬ ಮಾಡುತ್ತಿರುವುದಕ್ಕೆ ಕಾರಣಗಳೇನು; | **ನೇರನೇಮಕಾತಿ**:- ನೇರ ನೇಮಕಾತಿಗೆ ಸಂಬಂಧಿಸಿದಂತೆ ಸ್ವೀಕೃತವಾದ ಅರ್ಜಿಗಳನ್ನು ಪರಿಶೀಲಿಸಲು ಅಧಿಕಾರಿಗಳ ಅರ್ಜಿ ಪರಿಶೀಲನಾ ಸಮಿತಿಯನ್ನು ರಚಿಸಲಾಗಿರುತ್ತದೆ. ಅರ್ಜಿ ಪರಿಶೀಲನಾ ಸಮಿತಿಯ ವರದಿಯಲ್ಲಿ ಕೆಲ ಪೌರ ಕಾರ್ಮಿಕರ |

| | | |
|---|---|---|
| | | ಜನ್ಮ ದಿನಾಂಕ ಮತ್ತು ಸೇವೆಗೆ ಸೇರಿದ ದಿನಾಂಕದಲ್ಲಿ ವ್ಯತ್ಯಾಸವಿರುವುದನ್ನು ಗಮನಿಸಿ ಪರಿಶೀಲಿಸಿ ಮತ್ತೊಮ್ಮೆ ಸಲ್ಲಿಸಲು ಪಾಲಿಕೆಗೆ ಸೂಚಿಸಲಾಗಿದ್ದು, ಸದರಿಯವರಿಂದ ವರದಿ ಸ್ವೀಕೃತವಾದ ತಕ್ಷಣ ಅರ್ಹ ನೌಕರರನ್ನು ನಿಯಮಾನುಸಾರ ನೇರ ನೇಮಕಾತಿಗೆ ಕ್ರಮವಹಿಸಲಾಗುವುದು.<br><br>**<u>ನೇರ ಪಾವತಿ</u>**:- ಪೌರಕಾರ್ಮಿಕರ ಸಂಖ್ಯೆಯನ್ನು ಜೇಷ್ಠತೆ ಆಧಾರದ ಮೇಲೆ ಮಂಜೂರಾದ ಹುದ್ದೆಗಳಿಗೆ ಸೀಮಿತಗೊಳಿಸಿಕೊಂಡು ಆಯುಕ್ತರು, ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆ ರವರು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿ, ಸಂಬಂಧಪಟ್ಟ ಹೊರಗುತ್ತಿಗೆ ಪೌರ ಕಾರ್ಮಿಕರಿಗೆ ಆಕ್ಷೇಪಣೆ ಸಲ್ಲಿಸಲು ಅವಕಾಶ ಕಲ್ಪಿಸಿರುತ್ತಾರೆ. ಸದರಿ ತಾತ್ಕಾಲಿಕ ಪಟ್ಟಿಗೆ ಸ್ವೀಕೃತವಾದ ಆಕ್ಷೇಪಣೆಗಳನ್ನು ಪರಿಶೀಲಿಸಿ, ಅಂತಿಮ ಪಟ್ಟಿಯನ್ನು ಪ್ರಕಟಿಸಿ, ಅರ್ಹ ನೌಕರರ ಹೆಸರುಗಳನ್ನು FBAS ತಂತ್ರಾಂಶದಲ್ಲಿ ಅಳವಡಿಸಿರುತ್ತಾರೆ. |
| ಈ) | ಯಾವ ಕಾಲಮಿತಿಯೊಳಗೆ ಜಾರಿಗೊಳಿಸಲು ಕ್ರಮವಹಿಸಲಾಗುವುದು? | ಶೀಘ್ರದಲ್ಲಿಯೇ ಕ್ರಮವಹಿಸಲಾಗುವುದು. |

ಕಡತ ಸಂಖ್ಯೆ: ನಅಇ 40 ಎಹೆಚ್‌ಡಿ 2020(ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

ಜಿಲ್ಲಾಧಿಕಾರಿಗಳ ಕಾರ್ಯಾಲಯ
ಜಿಲ್ಲಾ ನಗರಾಭಿವೃದ್ಧಿ ಕೋಶ, ಧಾರವಾಡ

Phone : 0836-2233851 Fax : 0836-2441609
E-mail : dudc_dwd@yahoo.co.in

ಕ್ರ ಜಿಮುಡಿಸಿ/ಮು.ನ.ಪಾ/ಪೌ.ಕ. ನೇಮಕಾತಿ/ದಹ/2017-18 ದಿನಾಂಕ: 16-03-2018

-ಸಂಕ್ಷಿಪ್ತ ಅಧಿಸೂಚನೆ-

ಧಾರವಾಡ ಜಿಲ್ಲೆಯ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಖಾಲಿ ಇರುವ ಪೌರಕಾರ್ಮಿಕರ ಹುದ್ದೆಗಳನ್ನು ವಿಶೇಷ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಕ್ಷೇಮಾಭಿವೃದ್ಧಿ, ದಿನಗೂಲಿ, ಗುತ್ತಿಗೆ, ಹೊರಗುತ್ತಿಗೆ, ಸಮಾನ ಕೆಲಸಕ್ಕೆ ಸಮಾನ ವೇತನ ಅಡಿಯಲ್ಲಿ ಕೆಲಸ ಮಾಡುತ್ತಿರುವ ಅರ್ಹ ಪೌರಕಾರ್ಮಿಕ ಅಭ್ಯರ್ಥಿಗಳಿಂದ ನಿಗಧಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿ ನಮೂನೆಗಳನ್ನು ಜಿಲ್ಲಾಧಿಕಾರಿಗಳ ಕಚೇರಿ, ಜಿಲ್ಲಾ ನಗರಾಭಿವೃದ್ಧಿ ಕೋಶ, ಧಾರವಾಡ ಅಥವಾ ಆಯುಕ್ತರು, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಪಡೆಯಬಹುದು. ಭರ್ತಿ ಮಾಡಿರುವ ಅರ್ಜಿಯನ್ನು ಜಿಲ್ಲಾಧಿಕಾರಿಗಳ ಕಚೇರಿ, ಜಿಲ್ಲಾ ನಗರಾಭಿವೃದ್ಧಿ ಕೋಶ, ಧಾರವಾಡ ಅಥವಾ ಆಯುಕ್ತರು, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಕಚೇರಿಯಲ್ಲಿ ದಿನಾಂಕ: 30-03-2018 ರ ಒಳಗೆ ದಾಖಲೆಗಳೊಂದಿಗೆ ಕಚೇರಿ ವೇಳೆಯಲ್ಲಿ ಸಲ್ಲಿಸತಕ್ಕದ್ದು.

| ಅ.ಸಂ. | ಹುದ್ದೆ ಹೆಸರು | ಒಟ್ಟು ಹುದ್ದೆ | ಕನಿಷ್ಠ ವಿದ್ಯಾರ್ಹತೆ/ಅರ್ಹತೆ | ವೇತನ ಶ್ರೇಣಿ |
|---|---|---|---|---|
| 01 | ಪೌರಕಾರ್ಮಿಕ | | 1) ವಿದ್ಯಾರ್ಹತೆ ಅನ್ವಯಿಸುವುದಿಲ್ಲ.<br>2) ಕನ್ನಡ ಮಾತನಾಡಲು ಗೊತ್ತಿರಬೇಕು.<br>3) ಕ್ಷೇಮಾಭಿವೃದ್ಧಿ, ದಿನಗೂಲಿ, ಗುತ್ತಿಗೆ, ಹೊರಗುತ್ತಿಗೆ, ಸಮಾನ ಕೆಲಸಕ್ಕೆ ಸಮಾನ ವೇತನದಲ್ಲಿ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ನೌಕರರು ಮಾತ್ರ<br>4) ಕನಿಷ್ಠ 18 ವರ್ಷ ಗರಿಷ್ಠ ವಯೋಮಿತಿ 45 ವರ್ಷ. | ರೂ.9600-14550 |

1) ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸುವ ದಿನಾಂಕ:

| ವಿವರ | ದಿನಾಂಕ | ಅರ್ಜಿ ನಮೂನೆ ಪಡೆಯುವ ವಿಳಾಸ |
|---|---|---|
| ಅರ್ಜಿ ಸಲ್ಲಿಸಲು ಹಾಗೂ ಶುಲ್ಕ ಪಾವತಿಸಲು ಕೊನೆಯ ದಿನಾಂಕ | 30-03-2018 | ಜಿಲ್ಲಾ ನಗರಾಭಿವೃದ್ಧಿ ಕೋಶ ಧಾರವಾಡ ಅಥವಾ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ |

2) ಅರ್ಜಿಗಳನ್ನು ನೇರವಾಗಿ ಸಲ್ಲಿಸಿ ಸ್ವೀಕೃತಿ ಪಡೆಯತಕ್ಕದ್ದು. ಅರ್ಜಿಗಳನ್ನು ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.

3) ಅರ್ಜಿ ಶುಲ್ಕ ವಿವರ:

| ಜಾತಿ/ಪ್ರ ವರ್ಗ | ಶುಲ್ಕ (ರೂ.) | ಅರ್ಜಿ ಶುಲ್ಕ ಭರಿಸುವ ವಿಧಾನ |
|---|---|---|
| ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಪ್ರವರ್ಗ-1 ಅಭ್ಯರ್ಥಿಗಳಿಗೆ | 200.00 | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ನಗದು ರೂಪದಲ್ಲಿ ಪಾವತಿಸಿ ರಶೀದಿ ಪಡೆಯತಕ್ಕದ್ದು. |
| ಪ್ರವರ್ಗ-2ಎ, 2ಬಿ, 3ಎ, 3ಬಿ ಹಾಗು ಸಾಮಾನ್ಯ ಅಭ್ಯರ್ಥಿಗಳಿಗೆ | 250.00 | |

ಮೀಸಲಾತಿ ವಿವರ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ಒಟ್ಟು ಹುದ್ದೆಗಳು

| ಮೀಸಲಾತಿ | ಇತರ | ಮಹಿಳೆ | ಗ್ರಾಮೀಣ | ಮಾ.ಸೈ. | ಯೋ.ಪೀ. | ಕಮಾ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 14 | 20 | 17 | 06 | 03 | 03 | 04 | 67 |
| ಪ.ಪಂ. | 03 | 04 | 04 | 01 | 0 | 01 | 01 | 14 |
| ಪ್ರ-1 | 03 | 06 | 05 | 01 | 01 | 01 | 01 | 18 |
| ಪ್ರ-2(ಎ) | 13 | 20 | 17 | 06 | 03 | 03 | 04 | 66 |
| ಪ್ರ-2(ಬಿ) | 03 | 06 | 05 | 01 | 01 | 01 | 01 | 18 |
| ಪ್ರ-3(ಎ) | 03 | 05 | 05 | 01 | 01 | 01 | 01 | 17 |
| ಪ್ರ-3(ಬಿ) | 05 | 07 | 05 | 02 | 01 | 01 | 01 | 22 |
| ಸಾ.ಅ. | 45 | 67 | 55 | 22 | 11 | 11 | 11 | 222 |
| ಒಟ್ಟು | 89 | 135 | 113 | 40 | 21 | 22 | 24 | 444 |

1) ಹೆಚ್ಚಿನ ಮಾಹಿತಿ ಹಾಗೂ ವಿವರವಾದ ಅಧಿಸೂಚನೆಯನ್ನು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಮಾಹಿತಿಯನ್ನು ಪಡೆಯಬಹುದು.

2) ಈ ನೇಮಕಾತಿಯು ಸರ್ಕಾರದ/ಪೌರಾಡಳಿತ ನಿರ್ದೇಶನಾಲಯದಿಂದ ಕಾಲಕಾಲಕ್ಕೆ ಹೊರಡಿಸುವ ಆದೇಶ/ಸುತ್ತೋಲೆಯ ಷರತ್ತಿಗೊಳಪಟ್ಟಿರುತ್ತದೆ.

ಅಧ್ಯಕ್ಷರು
ಆಯ್ಕೆ ಮತ್ತು ನೇರ ನೇಮಕಾತಿ ಪ್ರಾಧಿಕಾರ
ಹಾಗೂ ಜಿಲ್ಲಾಧಿಕಾರಿಗಳು ಧಾರವಾಡ.

- ಉಪನಿಯಮ (2) ರಂತೆ ಆಯ್ಕೆಯಾಗಿರುವ ಅಭ್ಯರ್ಥಿಗಳು ನಿಗದಿತ ಅವಧಿಯೊಳಗೆ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಇದ್ದಲ್ಲಿ, ಸದರಿ ಅಭ್ಯರ್ಥಿಯ ಬದಲಾಗಿ ಅದೇ ಪ್ರವರ್ಗದ ಮೀಸಲಾತಿಯಲ್ಲಿ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಯಾಗಿರುವ ಮತ್ತೊಬ್ಬ ವ್ಯಕ್ತಿಯನ್ನು ಪರಿಗಣಿಸಲಾಗುವುದು.
- ಆಯ್ಕೆ ಮಾಡಲಾದ ಅಭ್ಯರ್ಥಿಗಳ ಪಟ್ಟಿಯು ಗುರುತಿಸಲಾದ ಖಾಲಿ ಹುದ್ದೆಗಳು ಭರ್ತಿಯಾಗುವವರೆಗೆ ಅಥವಾ ಆಯ್ಕೆ ಪಟ್ಟಿಯು ಪ್ರಕಟವಾದ 1 ವರ್ಷದ ಅವಧಿಯವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಚಾಲ್ತಿಯಲ್ಲಿರುತ್ತದೆ.
- ಅಭ್ಯರ್ಥಿಯು ಭಾರತೀಯ ನಾಗರೀಕನಾಗಿರತಕ್ಕದ್ದು.
- ಅಭ್ಯರ್ಥಿಗಳು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರುವ ಬಗ್ಗೆ ಜಿಲ್ಲಾ ಆಸ್ಪತ್ರೆಯ ವೈಧ್ಯಾಧಿಕಾರಿಗಳಿಂದ ದೇಹದಾರ್ಢ್ಯತೆ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.
- ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ಜಿಲ್ಲಾ ನೇಮಕಾತಿ ಸಮಿತಿಯು ಕಾಯ್ದಿರಿಸಕೊಂಡಿದೆ.

ಅಧ್ಯಕ್ಷರು
ಆಯ್ಕೆ ಮತ್ತು ನೇರ ನೇಮಕಾತಿ ಪ್ರಾಧಿಕಾರ ಹಾಗೂ
ಜಿಲ್ಲಾಧಿಕಾರಿಗಳು, ಧಾರವಾಡ.

10. ವಯೋಮಿತಿ:

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು ಹಾಗೂ ಗರಿಷ್ಠ ವಯೋಮಿತಿ ವಿವರಗಳು ಈ ಕೆಳಕಂಡಂತಿರುತ್ತದೆ.

| ಕ್ರಸಂ | ಜಾತಿ/ ಪ್ರವರ್ಗ | ಗರಿಷ್ಠ ವಯೋಮಿತಿ (ವರ್ಷಗಳಲ್ಲಿ) |
|---|---|---|
| 1 | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ಪ್ರವರ್ಗ-1 ಅಭ್ಯರ್ಥಿಗಳಿಗೆ | 45 |
| 2 | ಪ್ರ ವರ್ಗ-2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳಿಗೆ | 45 |
| 3 | ಸಾಮಾನ್ಯ ಅಭ್ಯರ್ಥಿಗಳಿಗೆ | 45 |

11. ನಿಗದಿಪಡಿಸಿದ ಇನ್ನಿತರೆ ಅರ್ಹತೆಗಳು:

- ಶೈಕ್ಷಣಿಕ/ ವಿದ್ಯಾರ್ಹತೆ ದಾಖಲಾತಿಗಳು/ ಆಧಾರ ಕಾರ್ಡ/ ಪಡಿತರ ಚೀಟಿ/ ಮತದಾರರ ಗುರುತಿನ ಚೀಟಿ ದಾಖಲಾತಿಗಳನ್ನು ಆಧರಿಸಿ ಅಭ್ಯರ್ಥಿಯ ವಯಸ್ಸನ್ನು ನಿರ್ಧರಿಸಲಾಗುವುದು.
- ಧಾರವಾಡ ಜಿಲ್ಲೆಯ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಹಾಲಿ ಕ್ಷೇಮಾಭಿವೃದ್ಧಿ/ ದಿನಗೂಲಿ/ ಗುತ್ತಿಗೆ/ ಹೊರಗುತ್ತಿಗೆ/ ಸಮಾನ ಕೆಲಸಕ್ಕೆ ಸಮಾನ ವೇತನ/ ಇತರ ಆಧಾರದ ಮೇಲೆ 2 ವರ್ಷಕ್ಕಿಂತ ಕಡಿಮೆ ಇಲ್ಲದೇ ನಿರಂತರವಾಗಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಈ ನಿಯಮ ಜಾರಿಗೆ ಬಂದ ದಿನಾಂಕದಲ್ಲಿಯೂ ಕಾರ್ಯನಿರ್ವಹಿಸುತ್ತಿರುವ ಪೌರಕಾರ್ಮಿಕರಿಗೆ ಮೊದಲ ಆದ್ಯತೆ ನೀಡಲಾಗುವುದು.
- ಕಡಿಮೆ ವರ್ಷ ಸಲ್ಲಿಸಿರುವವರಿಗಿಂತ, ಹೆಚ್ಚು ವರ್ಷ ಸೇವೆ ಸಲ್ಲಿಸಿದವರಿಗೆ ಮೊದಲ ಆದ್ಯತೆ ನೀಡಲಾಗುವುದು.
- ನೇಮಕಾತಿಯಲ್ಲಿನ ಆದ್ಯತೆಯನ್ನು ಕ್ಷೇಮಾಭಿವೃದ್ಧಿ/ ದಿನಗೂಲಿ/ ಗುತ್ತಿಗೆ/ ಹೊರಗುತ್ತಿಗೆ/ ಸಮಾನ ಕೆಲಸಕ್ಕೆ ಸಮಾನ ವೇತನ/ ಇತರೆ ಆಧಾರದ ಕೆಲಸ ನಿರ್ವಹಿಸುತ್ತಿರುವ ಪೌರಕಾರ್ಮಿಕರನ್ನು ಕ್ರಮವಾಗಿ ಪರಿಗಣಿಸಲಾಗುವುದು.
- ಹೊರಗುತ್ತಿಗೆ ಆಧಾರದ ಮೇಲೆ ಕೆಲಸ ನಿರ್ವಹಿಸುತ್ತಿರುವ ಪೌರಕಾರ್ಮಿಕರಿಗೆ ಸಂಬಂಧಿಸಿದಂತೆ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಪಾವತಿಸಲಾದ ಕಾರ್ಮಿಕರ ರಾಜ್ಯ ವಿಮೆ (ಇ.ಎಸ್.ಐ) ಮತ್ತು ಭವಿಷ್ಯ ನಿಧಿ (ಪಿ.ಎಫ್) ಹಾಜರಾತಿ ಮತ್ತು ವೇತನ ಪಡೆದ 2 ವರ್ಷದ ದಾಖಲಾತಿಗಳನ್ನು ಪರಿಗಣಿಸಲಾಗುವುದು.
- ಕ್ಷೇಮಾಭಿವೃದ್ಧಿ/ ದಿನಗೂಲಿ/ ಗುತ್ತಿಗೆ/ ಸಮಾನ ಕೆಲಸಕ್ಕೆ ಸಮಾನ ವೇತನ/ ಇತರೆ ಆಧಾರದ ಕೆಲಸ ನಿರ್ವಹಿಸುತ್ತಿರುವ ಪೌರಕಾರ್ಮಿಕರ 2 ವರ್ಷಗಳ ಮೇಲ್ಪಟ್ಟು, ನಗರ ಸ್ಥಳೀಯ ಸಂಸ್ಥೆಗಳಿಂದ ವೇತನ ಪಡೆದ ದಾಖಲಾತಿಗಳನ್ನು ಪರಿಗಣಿಸಲಾಗುವುದು.
- 2 ಮತ್ತು ಅದಕ್ಕಿಂತ ಹೆಚ್ಚಿನ ಅಭ್ಯರ್ಥಿಗಳ ಸೇವಾ ಅವಧಿ ಒಂದೇ ಇದ್ದ ಪಕ್ಷದಲ್ಲಿ ಅಂತಹ ಅಭ್ಯರ್ಥಿಗಳ ಜೇಷ್ಠತೆಯನ್ನು ಅವರ ವಯಸ್ಸಿಗೆ ಅನುಗುಣವಾಗಿ ಅಂದರೆ ಹೆಚ್ಚು ವಯಸ್ಕರನ್ನು ಕಡಿಮೆ ವಯಸ್ಕರಿಗಿಂತ ಮೇಲೆ ಪರಿಗಣಿಸಬೇಕು ಹಾಗೂ ಹುಟ್ಟಿದ ದಿನಾಂಕ ಹಾಗೂ ಸೇವಾ ಅವಧಿ ಒಂದೇ ಆಗಿದ್ದಲ್ಲಿ ಲಾಟರಿ ಮುಖಾಂತರ ಪರಿಗಣಿಸಬೇಕು.

5. ಅರ್ಜಿ ಶುಲ್ಕ:

| ಕ್ರಸಂ | ಜಾತಿ/ ಪ್ರ ವರ್ಗ | ಎಲ್ಲ ಹುದ್ದೆಗಳಿಗೆ (ರೂ) | ಅರ್ಜಿ ಶುಲ್ಕ ಭರಿಸುವ ವಿಧಾನ |
|---|---|---|---|
| 1 | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ಪ್ರವರ್ಗ-1 ಅಭ್ಯರ್ಥಿಗಳಿಗೆ | 200.00 | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ನಗದು ರೂಪದಲ್ಲಿ ಪಾವತಿಸಿ ರಶೀದಿ ಪಡೆಯತಕ್ಕದ್ದು. |
| 2 | ಪ್ರ ವರ್ಗ-2ಎ, 2ಬಿ, 3ಎ, 3ಬಿ ಹಾಗೂ ಸಾಮಾನ್ಯ ಅಭ್ಯರ್ಥಿಗಳಿಗೆ | 250.00 | |

6. ನೇಮಕಾತಿ ಹುದ್ದೆಗಳ ವಿವರ:

| ಕ್ರಸಂ | ಹುದ್ದೆಗಳ ವಿವರ | ವೃಂದ | ವೇತನ ಶ್ರೇಣಿ (ರೂ.ಗಳಲ್ಲಿ) | ಸ್ಥಳೀಯ ವೃಂದಕ್ಕೆ ಒಟ್ಟು ಹುದ್ದೆಗಳು |
|---|---|---|---|---|
| 1 | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಖಾಲಿ ಇರುವ ಪೌರಕಾರ್ಮಿಕರು | 'ಡಿ' | 9600-14550 | 444 |

7. ಹುದ್ದೆಗಳ ವರ್ಗೀಕರಣ

| ಮೀಸಲಾತಿ | ಇತರ | ಮಹಿಳೆ | ಗ್ರಾಮೀಣ | ಮಾ.ಸೈ | ಯೋ.ನ. | ಕ.ಮಾ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 14 | 20 | 17 | 06 | 03 | 03 | 04 | 67 |
| ಪ.ಪಂ. | 03 | 04 | 04 | 01 | 0 | 01 | 01 | 14 |
| ಪ್ರ-1 | 03 | 06 | 05 | 01 | 01 | 01 | 01 | 18 |
| ಪ್ರ-2(ಎ) | 13 | 20 | 17 | 06 | 03 | 03 | 04 | 66 |
| ಪ್ರ-2(ಬಿ) | 03 | 06 | 05 | 01 | 01 | 01 | 01 | 18 |
| ಪ್ರ-3(ಎ) | 03 | 05 | 05 | 01 | 01 | 01 | 01 | 17 |
| ಪ್ರ-3(ಬಿ) | 05 | 07 | 05 | 02 | 01 | 01 | 01 | 22 |
| ಸಾ.ಅ. | 45 | 67 | 55 | 22 | 11 | 11 | 11 | 222 |
| ಒಟ್ಟು | 89 | 135 | 113 | 40 | 21 | 22 | 24 | 444 |

8. ಶೈಕ್ಷಣಿಕ ವಿದ್ಯಾರ್ಹತೆ:

| ಅ.ಸಂ. | ಹುದ್ದೆ ಹೆಸರು | ಕನಿಷ್ಠ ವಿದ್ಯಾರ್ಹತೆ/ಅರ್ಹತೆ |
|---|---|---|
| 01 | ಪೌರಕಾರ್ಮಿಕ | 1) ವಿದ್ಯಾರ್ಹತೆ ಅನ್ವಯಿಸುವುದಿಲ್ಲ.<br>2) ಕನ್ನಡ ಮಾತನಾಡಲು ಗೊತ್ತಿರಬೇಕು.<br>3) ಕ್ಷೇಮಾಭಿವೃದ್ಧಿ, ದಿನಗೂಲಿ, ಗುತ್ತಿಗೆ, ಹೊರಗುತ್ತಿಗೆ, ಸಮಾನ ಕೆಲಸಕ್ಕೆ ಸಮಾನ ವೇತನದಲ್ಲಿ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ನೌಕರರು ಮಾತ್ರ. |

9. ಪಿಂಚಣಿ ಸೌಲಭ್ಯ:

ಧಾರವಾಡ ಜಿಲ್ಲೆಯ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಖಾಲಿ ಇರುವ ವಿವಿಧ 'ಡಿ' ದರ್ಜೆ ಹುದ್ದೆಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ(ಎಸ್.ಪಿ.ಎಲ್)/04/ಪಿ.ಇ.ಟಿ/2005 ದಿನಾಂಕ:31.03.2006 ರಂತೆ ಎನ್.ಪಿ.ಎಸ್ (New Pension Scheme) ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.

ಜಿಲ್ಲಾಧಿಕಾರಿಗಳ ಕಾರ್ಯಾಲಯ
ಜಿಲ್ಲಾ ನಗರಾಭಿವೃದ್ಧಿ ಕೋಶ, ಧಾರವಾಡ

Phone : 0836-2233851 Fax: 0836-2441609
E-mail : dudc_dwd@yahoo.co.in

ಕ್ರ ಡಿಯುಡಿಸಿ/ಮನಪಾ/ಪೌ.ಕ. ನೇಮಕಾತಿ/ವಶಿ/2017-18 ದಿನಾಂಕ 16-03-2018

## ಅಧಿಸೂಚನೆ

ಧಾರವಾಡ ಜಿಲ್ಲೆಯ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಕ್ಷೇಮಾಭಿವೃದ್ಧಿ/ ದಿನಗೂಲಿ/ ಗುತ್ತಿಗೆ/ ಹೊರಗುತ್ತಿಗೆ/ಸಮಾನ ಕೆಲಸಕ್ಕೆ ಸಮಾನ ವೇತನದಲ್ಲಿ ಕಾರ್ಯನಿರ್ವಹಿಸುತ್ತಿರುವ ತಾತ್ಕಾಲಿಕ ಪೌರಕಾರ್ಮಿಕರನ್ನು ಖಾಲಿ ಇರುವ "ಪೌರ ಕಾರ್ಮಿಕರ" ಹುದ್ದೆಗಳಿಗೆ ನೇರ ನೇಮಕಾತಿ ಮಾಡಿಕೊಳ್ಳಲು ಸರ್ಕಾರದ ಆದೇಶ ಸಂಖ್ಯೆ ನಅಇ/126/ಟಿ.ಎಂ.ಎಸ್/2016, ದಿನಾಂಕ: 07.08.2017 ರಂತೆ ಕರ್ನಾಟಕ ಮಹಾನಗರ ಪಾಲಿಕೆಗಳ (ಅಧಿಕಾರಿ ಮತ್ತು ನೌಕರರ ನೇಮಕಾತಿ) ನಿಯಮಗಳು 2011 ನ್ನು ಅಂತಿಮಗೊಳಿಸಿ ಅಧಿಸೂಚನೆಯನ್ನು ಹೊರಡಿಸಿದ್ದರ ಮೇರೆಗೆ ಮಹಾನಗರ ಪಾಲಿಕೆಗಳಲ್ಲಿನ ಪೌರಕಾರ್ಮಿಕರ ಹುದ್ದೆಗಳನ್ನು ಸರ್ಕಾರದ ಆದೇಶ ಸಂಖ್ಯೆ ನಅಇ/126/ಎಂ.ಎನ್.ಇ/2016, ದಿನಾಂಕ: 07.08.2017 ರಂತೆ ಪೌರಕಾರ್ಮಿಕರುಗಳ ಸಂಖ್ಯೆಯನ್ನು 2011ನೇ ಸಾಲಿನ ಜನಗಣತಿ ರೀತ್ಯಾ ಪ್ರತಿ 700 ಜನಸಂಖ್ಯೆಗೆ ಒಬ್ಬರಂತೆ ಸೀಮಿತಗೊಳಿಸಿ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ 2011ರ ಕರ್ನಾಟಕ ಮಹಾನಗರ ಪಾಲಿಕೆಗಳ (ಅಧಿಕಾರಿ ಮತ್ತು ನೌಕರರ ನೇಮಕಾತಿ) ನಿಯಮಗಳ ರೀತ್ಯಾ ಹಾಗೂ ಸರ್ಕಾರದ ಆದೇಶ ಸಂಖ್ಯೆ ನಅಇ/150/ಟಿ.ಎಂ.ಎಸ್/2017 ದಿನಾಂಕ: 24.01.2018ರ ಆದೇಶದಂತೆ ಮಹಾನಗರ ಪಾಲಿಕೆಗಳಲ್ಲಿ ಶೇ. 50 ರಷ್ಟು ಮತ್ತು ಪುರಸಭೆಗಳು ಮತ್ತು ಪಟ್ಟಣ ಪಂಚಾಯತಿಗಳಲ್ಲಿ ಶೇ. 100 ರಷ್ಟು ಪೌರಕಾರ್ಮಿಕರ ಹುದ್ದೆಗಳನ್ನು ನೇರ ನೇಮಕಾತಿಗಳೆಂದು ಪರಿಗಣಿಸಿ ಈ ರೀತಿ ಲೆಕ್ಕಾಚಾರ ಮಾಡಿಕೊಂಡ ನಂತರ ನಿಗದಿಪಡಿಸಿಕೊಂಡಿರುವ ಹುದ್ದೆಗಳಲ್ಲಿ ನೇರ ನೇಮಕಾತಿ ಹೊಂದಿ ಖಾಲಿ ಕೆಲಸ ನಿರ್ವಹಿಸುತ್ತಿರುವ ಪೌರಕಾರ್ಮಿಕರ ಸಂಖ್ಯೆಯನ್ನು ಕಳೆದು ಖಾಲಿ ಉಳಿಯುವ ಹುದ್ದೆಗಳಿಗೆ ಸರ್ಕಾರದ ವಿಶೇಷ ನೇಮಕಾತಿ ನಿಯಮಗಳ ರೀತ್ಯಾ ಖಾಲಿ ಇರುವ ಪೌರಕಾರ್ಮಿಕರ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ.

1. ಅಭ್ಯರ್ಥಿಗಳು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಅರ್ಜಿಯನ್ನು ಸಲ್ಲಿಸತಕ್ಕದ್ದು.
2. ಅಭ್ಯರ್ಥಿಗಳು ಅರ್ಜಿಯಲ್ಲಿ ಕೋರುವ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ, ಅಧಿಸೂಚನೆಯ ಅನುಬಂಧದಲ್ಲಿರುವ ನಮೂನೆಗಳಲ್ಲಿಯೇ ಕಡ್ಡಾಯವಾಗಿ ಪಡೆದಿಟ್ಟುಕೊಂಡಿರತಕ್ಕದ್ದು.
3. ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸುವ ದಿನಾಂಕ: 30.03.2018.

| ವಿವರ | ದಿನಾಂಕ | ಅರ್ಜಿ ನಮೂನೆ ಪಡೆಯುವ ವಿಳಾಸ |
|---|---|---|
| ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ | 16.03.2018 | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ |
| ಮೂಲ ಅರ್ಜಿ ಸಲ್ಲಿಸಲು ಹಾಗೂ ಶುಲ್ಕ ಪಾವತಿಸಲು ಕೊನೆಯ ದಿನಾಂಕ | 30.03.2018 | |

4. ಅರ್ಜಿಗಳನ್ನು ನೇರವಾಗಿ ಸಲ್ಲಿಸಿ ಸ್ವೀಕೃತಿ ಪಡೆಯತಕ್ಕದ್ದು, ಅರ್ಜಿಗಳನ್ನು ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶ ಇರುವುದಿಲ್ಲ.

ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ
ಸಾಮಾನ್ಯ ಆಡಳಿತ ಶಾಖೆ. (ಮು).
ಒ.ನಂ: ABA
17 MAR 2018
5059
17/03/18
ಅಧಿಕಾರಿ.

ವಿಜಯವಾಣಿ

ಕರ್ನಾಟಕ ಸರ್ಕಾರ
ಜಿಲ್ಲಾಧಿಕಾರಿಗಳ ಕಾರ್ಯಾಲಯ,
ಜಿಲ್ಲಾ ನಗರಾಭಿವೃದ್ಧಿ ಕೋಶ, ಧಾರವಾಡ Phone : 0836-2233851
Fax : 0836-2441609 E-mail : dudc_dwd@yahoo.co.in

ಕ್ರ. ಜಿಯುಡಿಸಿ/ಪೌ.ನ.ಪಾ/ಪ.ಕ. ನೇಮಕಾತಿ/ಪಕ/2018-19 ದಿನಾಂಕ : 17-07-2018

## ತಿದ್ದುಪಡಿ ಅಧಿಸೂಚನೆ

ಧಾರವಾಡ ಜಿಲ್ಲೆಯ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಖಾಲಿ ಇರುವ ಪೌರಕಾರ್ಮಿಕರ ಹುದ್ದೆಗಳನ್ನು, ವಿಶೇಷ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಕ್ಷೇಮಾಭಿವೃದ್ಧಿ, ದಿನಗೂಲಿ, ಗುತ್ತಿಗೆ, ಹೊರಗುತ್ತಿಗೆ, ಸಮಾನ ಕೆಲಸಕ್ಕೆ ಸಮಾನ ವೇತನ ಅಡಿಯಲ್ಲಿ ಕೆಲಸ ಮಾಡುತ್ತಿರುವ ಅರ್ಹ ಪೌರಕಾರ್ಮಿಕ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ದಿನಾಂಕ : 16-03-2018 ರ ಸಂಕ್ಷಿಪ್ತ ಅಧಿಸೂಚನೆಯಲ್ಲಿ 444 ಹುದ್ದೆಗಳಿಗೆ ಅರ್ಜಿಗಳನ್ನು ಆಹ್ವಾನಿಸಿ ದಿನಾಂಕ : 18-03-2018 ರ ವಿಜಯವಾಣಿ ಕನ್ನಡ ದಿನ ಪತ್ರಿಕೆಯಲ್ಲಿ ಪ್ರಕಟಗೊಳಿಸಿದ್ದು, ನೇರ ನೇಮಕಾತಿಗೆ 134 ಹುದ್ದೆಗಳು ಇರುವದರಿಂದ ಈ ಹಿಂದೆ ಪ್ರಕಟಗೊಳಿಸಿದ ಅಧಿಸೂಚನೆ ಈ ಕೆಳಗಿನಂತೆ ತಿದ್ದುಪಡಿ ಪ್ರಕಾರ ಓದಿಕೊಳ್ಳುವುದು.

ಮೀಸಲಾತಿ ವಿವರ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ಒಟ್ಟು ಹುದ್ದೆಗಳು

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಯೋ.ನಿ. | ಕ.ಮಾ.ಅ | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 05 | 06 | 05 | 02 | 01 | 01 | 01 | 21 |
| ಪ.ಪಂ. | 01 | 01 | 01 | 0 | 0 | 0 | 01 | 04 |
| ಪ್ರ-1 | 01 | 02 | 02 | 0 | 0 | 0 | 01 | 06 |
| ಪ್ರ-2(ಎ) | 04 | 06 | 05 | 02 | 01 | 01 | 01 | 20 |
| ಪ್ರ-2(ಬಿ) | 01 | 02 | 01 | 0 | 0 | 0 | 01 | 05 |
| ಪ್ರ-3(ಎ) | 01 | 02 | 01 | 0 | 0 | 0 | 01 | 05 |
| ಪ್ರ-3(ಬಿ) | 01 | 02 | 02 | 0 | 0 | 0 | 01 | 06 |
| ಸಾ.ಅ. | 14 | 20 | 17 | 06 | 03 | 03 | 04 | 67 |
| ಒಟ್ಟು | 28 | 41 | 34 | 10 | 05 | 05 | 11 | 134 |

1) ಹೆಚ್ಚಿನ ಮಾಹಿತಿ ಹಾಗೂ ವಿವರವಾದ ಅಧಿಸೂಚನೆಯನ್ನು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಮಾಹಿತಿಯನ್ನು ಪಡೆಯಬಹುದು.
2) ಈ ನೇಮಕಾತಿಯು ಸರಕಾರದ/ಪೌರಾಡಳಿತ ನಿರ್ದೇಶನಾಲಯದಿಂದ ಕಾಲಕಾಲಕ್ಕೆ ಹೊರಡಿಸುವ ಆದೇಶ/ಸುತ್ತೋಲೆಯ ಷರತ್ತಿಗೊಳಪಟ್ಟಿರುತ್ತದೆ.

ಸಹಿ/- ಅಧ್ಯಕ್ಷರು, ಆಯ್ಕೆ ಮತ್ತು ನೇರ ನೇಮಕಾತಿ ಪ್ರಾಧಿಕಾರಿ
ಹಾಗೂ ಜಿಲ್ಲಾಧಿಕಾರಿಗಳು, ಧಾರವಾಡ

ವಾ.ಸಾ.ಇ/ಧಾ/2018-19/135/MCA

Hubli Edition
20 July, 2018 Page No. 5
Powered by: erelego.com